Srimate Nigamanta Mahadesikaya Nama:



# PARAMARTASTUTI

(by Sri Vedanta Desika)

Kannada Commentary
by
Sri U. Ve. Anantharangachariar
Bangalore

Published by :
Sri Vedanta Desika
Research Centre
No.2, Lakshmipuram, II Street,
Villivakkam, Madras 600 049
Phone : 626 8481

7-5-1995

ಶ್ರೀಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಶ್ರೀವೇದಾಂತದೇಶಿಕ ವಿರಚಿತ -

# ಶ್ರೀಪರಮಾರ್ಥ ಸ್ತುತಿ

ವ್ಯಾಖ್ಯಾತಃ

ಶ್ರೀಮದುಭಯ ವೇದಾಂತ ವಿದ್ವಾನ್
ಅನಂತ ರಂಗಾಚಾರ್ಯಸ್ವಾಮಿಗಳು.

ಪ್ರಕಾಶನ 7-5-95
ಶ್ರೀವೇದಾಂತ ದೇಶಿಕ ರಿಸರ್ಚ್ ಸೆಂಟರ್
2 ಲಕ್ಷ್ಮೀಪುರಂ II ಸ್ಟ್ರೀಟ್
ಪೆಲ್ಲಿವಾಕ್ಕಂ. ಮದ್ರಾಸ್ 49
Ph. 6268481

# General Introduction

Our Country secured independence over four decades ago and we got the freedom to decide what is best for us, to reorganise our priorities, frame laws best suited to our culture, and develop our natural resources. But in the process of doing so, somewhere along the way, we have allowed the country to be overrun by hidden enemies like greed, corruption, lawlessness, violence, bigotry, casteism, hypocrisy, etc. We seem to have lost our moral moorings for which our country was justly famous for several centuries.

While the older generation is groping in the dark and cogitating how best to introduce moral renaissance and rejuvenation, the impatient younger generation taken the downhill path of easy virtues and easier money. We have to reverse these trends at any cost. Proper education on the right lines alone can stem the rot. The impressionable youth as well as the wavering, non-committed elders have to be made aware of the best of Indian culture and tradition, the eternal values of life, and the higher levels of creativity our country had reached in the past centuries. Fortunately, we have with us eminently satisfying philosophies which give clear guidelines to human development in all walks of life.

Among these philosophies, is the Visishtadvaita Philosophy, propounded by Sri Ramanuja, with its rich imagery of a Brahman (God) endowed with infinite auspicious qualities. This philosophy is replete with ennobling thoughts for every individual. The beaconlight

of this philosophy is Sri Vedanta Desika (1268-1369), who strode on the stage of Indian culture like a magestic lion. He was a philosopher par excellence, poet extraordinary, devotee supreme, a prolific writer, a practioner of what he preached and above all a person of rare humility and supreme contentment. He has authoured over a hundred works in Sanskrit, Tamil and Manipravala ( a smooth mixture of Sanskrit and Tamil) comprising of poems, hymns, dramas, treatises and commentaries. One is sure to come across a gem of a thought or a capsule of wisdom which is just what one needs to lighten the burden of life and enrich the quality of one's life. Sri Desika embodies the only hope, the only light to dispel the darkness around, the only life-belt to keep us afloat in the raging sea.

Accordingly, Sri Vedanta Desika Research Centre has been formed with the objective of enabling a deeper study of Sri Desika's teachings, beginning with his Stotras. These Stotras contain the quintessence of the teachings of the Vedas and the mysticism of the divinity-charged Alwars. They also contain highly potent Mantras which are needed today to mitigate the common man's sufferings in his daily grind. It is proposed to issue translations, im simple, readable style, of Sri Desika's Stotras in all Indian languages for wider circulation throughout the length and breadth of the country and also internationally; and publish pamplets and booklets containing Sri Desika's thoughts on socially useful topics like health, education, contentment, character, diligence, compassion, divine grace, yoga, etc.

Besides, a graded correspondence (self-study) course comprising of his Stotras, Upanishads and Prabandhams, each of six months duration, is being commenced in the next few months.

The Centre has plans to create a Corpus Fund to finance the upkeep and maintenance of Sri Desika Sannidhies, all over India, through periodical grants and donations. Ceremonial visits of Sri Desika's idol are being arranged to residences of his votaries. Finally, it is proposed to establish a " Darsana Hall-cum Library" to assemble, under one roof, photographs, pictures and works of earlier Acharyas and Scholars. The Centre, is the brainchild of Desika Bhakta Ratna Sri Seva Srinivasa Raghavachariar Swamy of Villivakkam, Madras, who has been cherishing these ideals for decades and working single-handedly towards these objectives. Fittingly, on the completion of 726 years after the advent of Sri Desika, the translation-series of his Stotras has been inaugurated in Tamil, English, Hindi, Telugu and Kannada.

This is a noble and gigantic venture, which needs cooperation and assistance from all like-minded persons which, it is hoped, will be available in good measure.

May Sri Vedanta Desika guide us ever in our humble efforts.

M.K. Srinivasan
President
Sri Vedanta Desika Research Centre

# Sri Vedanta Desika Research Centre

Founder & Chief Patron
Sri Seva N. Srinivasa Raghavachariar

Patrons

1. Sri N. Kasturi Rangan
2. Sri V. Upendran
3. Sri V. Venkatesan, Muscat
4. Sri R. Venkatachari, Salem
5. Sri T.E. Soundararajan
6. Sri Y. Sathyamurthi, Tokyo

Executive Committee:

| | |
|---|---|
| Sri M.K. Srinivasan, | President |
| Sri T.C. Srinivasan } | Vice Presidents |
| Sri V.K.S.N. Raghavan } | |
| Sri A. Rajagopalan | Secretary |
| Sri T.V. Srinivasan | Treasurer |
| Sri K. Vidyasagar | Member |
| Sri R. Srinivasan | Member |
| Sri D. Soundararajan | Member |
| Sri R. Seshadri | Member |
| Smt. Hema Rajagopalan | Member |

Funding: Tattva Heritage Foundation,Kolkata. Digitization: eGangotri.



திருப்புட்குழி விஜயராகவன்

# श्री परमार्थस्तुतिः

श्रीमान् वेङ्कटनाथार्यः कवितार्किककेसरी ।
वेदान्ताचार्यवर्यो मे सन्निधत्तां सदा हृदि ॥

श्रीमद् गृध्रसरस्तीरपारिजातमुपास्महे ।
यत्र तुङ्गैरतुङ्गैश्च प्रणतैः गृह्यते फलम् ॥

गुरुभिस्त्वदनन्यसर्वभावैः
गुणसिन्धौ कृतसंप्लवस्त्वदीये ।
रणपुङ्गव वन्दिभावमिच्छन्
अहमस्म्येकमनुग्रहास्पदं ते ॥

भुवनाश्रय भूषणास्त्रवर्गं
मनसि त्वन्मयतां ममातनोतु ।
वपुराहवपुङ्गव त्वदीयं
महिषीणां अनिमेषदर्शनीयम् ॥

अभिरक्षितुमग्रतःस्थितं त्वां
प्रणवे पार्थरथे च भावयन्तः।

अहितप्रशमैः अयत्नलभ्यैः
कथयन्ति आहवपुङ्गवं गुणज्ञाः।।

कमला निरपायधर्मपत्नी
करुणाद्याः स्वयं ऋत्विजो गुणास्ते।
अवनं श्रयतां अहीनमाद्यं
स च धर्मः त्वदनन्यसेवनीयः।।

कृपणाःसुधियः कृपासहायं
शरणं त्वां रणपुङ्गव प्रपन्नाः।
अपवर्गनयादनन्यभावाः
वरिवस्यारसमेकमाद्रियन्ते ।।

अवधीर्य चतुर्विधं पुमर्थं
भवदर्थे विनियुक्तजीवितस्सन् ।
लभते भवतः फलानि जन्तुः
निखिलान्यत्र निदर्शनं जटायुः।।

शरणागतरक्षणव्रती मां
न विहातुं रणपुङ्गवार्हसि त्वम् ।
विदितं भुवने विभीषणो वा
यदि वा रावण इत्युदीरितं ते।।

भुजगेन्द्रगरुत्मदादिलभ्यैः
त्वदनुज्ञानुभवप्रवाहभेदैः।
स्वपदे रणपुङ्गव स्वयं मां
परिचर्याविभवैःपरिष्क्रियेथाः ॥

विमलाशयवेङ्कटेशजन्मा
रमणीया रणपुङ्गवप्रसादात् ।
अनसूयुभिरादरेण भाव्या
परमार्थस्तुतिरन्वहं प्रपन्नैः॥

कवितार्किकसिंहाय कल्याणगुणशालिने ।
श्रीमते वेङ्कटेशाय वेदान्तगुरवे नमः ॥



Funding: Tattva Heritage Foundation,Kolkata. Digitization: eGangotri.



# श्रीपरमार्थ नामावळिः

(सेवा श्रीनिवासराघवाचार्यः)

ॐ श्रीमद्गृध्रसरस्तीरपारिजाताय नमः

ॐ गुणसिन्धवे नमः

ॐ रणपुङ्गवाय नमः

ॐ भुवनाश्रयभूषणास्त्रवर्गाय नमः

ॐ महिष्यनिमेषदर्शनीयवपुषे नमः

ॐ प्रणवाग्रस्थिताय नमः

ॐ पार्थ रथाग्रस्थिताय नमः

ॐ आहवपुङ्गवाय नमः

ॐ निखिलफलप्रदाय नमः

ॐ शरणागतरक्षणव्रतिने नमः

ॐ श्रियःपतये नमः

ॐ परमार्थाय नमः

श्रीविजयराघवपरब्रह्मणे नमः



# Publisher's Preface

The Karnataka State is associated with both Sri Ramanuja and Sri Vedanta Desika who staved there for long years to avoid persecution by Saivites and Mohammeaans respectively. The literature on Visishtadvaita philosophy in Kannada is therefore profound and voluminous too, next only to that in Tamil. Not a little of this is due to Schoiars like Dr. Anantha Rangacharya, Vedanta Vidwan, Honorary Registrar of Bharatiya Vidya Bhavan, who had also held the post of Deputy Director of literary and cultural development in the Government of Karnataka. He is also, associated with the Academy of Sanskrit Research, Melkote, since its inception. His thesis for Doctorate was "Sadhana in Visishtadvaita according to Srimad Rahasyatrayasara of Sri Vedanta Desika". He has authored several books, travelled widely and delivered many lectures on diverse topics in Sri Ramanuja Darsana.

That such a great and enlightened scholar has agreed to translate Paramartastuti in Kannada at the request of our President, who met him at Bangalore, a couple of months back, speaks volumes of his generosity and kindness. The fact that not only did he agree to do so, but also offered all his earlier published translations of Sri Desika-stotras for republication by our Centre is a shot in the arm for us and has given us encouragement beyond expectations.

As the reader will see, the translation and commentary on each Sloka has the stamp of authority and mellifluence of a high order. Sri Vedanta Desika Research Centre offers this publication to the Kannada knowing public for their reading pleasure, with the hope that it will re-kindle interest in Sri Desika's teachings and spread his message far and wide to all parts of the country.

# ನಿವೇದನೆ

ಶ್ರೀವೇದಾಂತ ದೇಶಿಕರು ರಚಿಸಿದ ಶತಾಧಿಕ ಗ್ರಂಥಗಳಲ್ಲಿ ಸ್ತೋತ್ರ ಗ್ರಂಥವು ಬಹಳ ಶ್ರೇಷ್ಠವಾದುದು. ಆ ಸ್ತೋತ್ರಗಳನನ್ನುನ ಪಠಿಸಿದವರಿಗೆ ಶಾಂತಿ, ಸಮೃದ್ಧಿ, ಸಂತೋಷ, ಸೌಭಾಗ್ಯ ಉಂಟಾಗುತ್ತದೆ ಎಂಬುದು ಮಹಾನುಭಾವರ ಅನುಭವದಿಂದ ತೀರ್ಮಾನಿಸಲ್ಪಟ್ಟ ವಿಷಯವಾಗಿದೆ.

ಈ ಕಲಿಕಾಲ ಕ್ಷೋಭೆಯಲ್ಲಿ ದಿಕ್ಕು ತಿಳಿಯದೆ ಕಷ್ಟಪಡುವ ಜೀವನಿಗೆ ಆಚಾರ್ಯರುಗಳು ರಚಿಸಿದ ಸ್ತೋತ್ರಗಳು ವರಪ್ರಸಾದವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಮಧ್ವಸಂಪ್ರದಾಯ ಶಿರೋಧಾರಿಗಳಾದ ಶ್ರೀ ಅಕ್ಷೋಭ್ಯಸ್ವಾಮಿಗಳ ಸಿದ್ಧಾಂತವೇ ಸರಿಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದವರೇ ಶ್ರೀವೇದಾಂತ ದೇಶಿತರು. ಶ್ರೀಹಯಗ್ರೀವ ಸಾಕ್ಷಾತ್ಕಾರವನ್ನು ಪಡೆದವರು. ಭಕ್ತರು ಇವರನ್ನು ಅಪರ ಹಯಗ್ರೀವರೇಂದೇ ಕರೆಯತ್ತಾರೆ.

ಇವರು ರಚಿಸಿದ ಸ್ತೋತ್ರಗಳು ಎಲ್ಲವೂ ಅದ್ಭುತವಾದವೇ. ಅವುಗಳಲ್ಲಿ ಈ ಪರಮಾರ್ಥಾಸ್ತುತಿ ಒಂದು. ಇದು ಬಹಳ ರಮಣೀಯವಾಗಿದೆ ಎಂದು ತಾವೇ ಆಶ್ಚರ್ಯಪಟ್ಟು ಬರೆದಿರುತ್ತಾರೆ. ಆ ರಮಣೀಯತೆಯನ್ನು ಅನುಭವಿಸುವ ಜ್ಞಾನವು ಅಧಿಕವಾಗಿ ಬೇಕಾಗುತ್ತದೆ. ಆದರೆ ಆ ಸ್ತೋತ್ರದ ಫಲವನ್ನು ಯಾರೂ ಅನುಭವಿಸದೆ ಇರಕೂಡದು ಎಂದು ವರ್ಣಿಸಿ ಪ್ರತಿ ಶ್ಲೋಕ ಭಾವ ತಾತ್ಪರ್ಯಗಳನ್ನು ಇಲ್ಲಿ ವಿವರಿಸುವುದು ನಮ್ಮ ಉದ್ದೇಶವಾಗಿದೆ. ಪ್ರಕೃತ ಪರಮಾರ್ಥಸ್ತುತಿ ಸ್ತೋತ್ರಗಳಿಗೆ ಬೆಂಗಳೂರುವಾಸಿಯಾದ ಉಭಯ ವೇದಾಂತ ಮಹಾವಿದ್ವನ್ ಶ್ರೀ ಮದನಂತರಂಗಾಚಾರ್ಯರು ಈ ಕನ್ನಡ ವಿವರಣೆಯನ್ನು ಕೃಪೆಯಿಂದ ಬರೆದು ಉಪಕರಿಸಿದ್ದಾರೆ. ಕನ್ನಡಿಗರು ಇದನ್ನು ಉಪಯೋಗ ಪಡೆದು ಸೌಭಾಗ್ಯನ್ನು ಹೊಂದಲೆಂದು ನಮ್ಮ ಅಭ್ಯರ್ಥನೆಗಳು. ಶ್ರೀಉಭಯವೇದಾಂತ ಪ್ರಕಾಸ್ ಹಲವುಗ್ರಂಥ ನಿರ್ಮಾಪಕರಿಗೆ ನಮ್ಮ ಹಾರ್ದಿಕ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇವೆ.

# ಪರಮಾರ್ಥಸ್ತುತಿ

## (ಪ್ರವೇಶ)

ಕಾಂಚೀಪುರದ ಹತ್ತಿರ ಇರುವ 'ತಿರುಪುಟ್ಕುಳಿ' ಎಂಬ ದಿವ್ಯಕ್ಷೇತ್ರದಲ್ಲಿ ವಿರಾಜಮಾನನಾಗಿರುವ ಶ್ರೀ ವಿಜಯರಾಘವ ಸ್ವಾಮಿಯನ್ನು ಈ ಸ್ತೋತ್ರದಲ್ಲಿ ಶ್ರೀ ಮನ್ನಿಗಮಾಂತಮಹಾದೇಶಿಕರವರು ಸ್ತುತಿಸಿದ್ದಾರೆ. ಪರಬ್ರಹ್ಮಭೂತನೂ ಪುರುಷೋತ್ತಮನೂ ಶ್ರಿಯಃಪತಿಯೂ ಆದ ಪರಮಾತ್ಮನೇ 'ಪರಮಾರ್ಥನು'. ಪರಮಪುರುಷಾರ್ಥನಾದವನೂ ಅವನೇ. ಅವನೇ ಆಚಾರ್ಯಾವತಾರಿಯಾಗಿ ಈ ಕ್ಷೇತ್ರದಲ್ಲಿ ನಿತ್ಯ ವಾಸ ಮಾಡುತ್ತಿದ್ದಾನೆ. ಪರಮಾರ್ಥನಾದ ಅವನನ್ನು ಈ ಸ್ತೋತ್ರದಲ್ಲಿ ದೇಶಿಕರವರು ಅನುಪಮವಾದ ಹತ್ತು ಶ್ಲೋಕಗಳಿಂದ ಸ್ತುತಿಸಿದ್ದಾರೆ. 'ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯ' ಎಂದು ಭಾಷ್ಯಕಾರರು ಕೊಂಡಾಡಿರುವುದಕ್ಕನುಸಾರ ಮೇಲು ಕೀಳು ಎಂಬ ಭೇದವೇ ಇಲ್ಲದೆ ಎಲ್ಲರೂ ಆಸ್ವಾಮಿಯನ್ನು ಆಶ್ರಯಿಸಿ ತಮ್ಮ ತಮ್ಮ ಅಭೀಷ್ಟಗಳನ್ನು ಪಡೆದುಕೊಳ್ಳಬಹುದು. 'ಸಮೋಹಮ್ ಸರ್ವಭೂತೇಷು' ಎಂದು ತಾನೇ ಶ್ರೀ ಗೀತೆಯಲ್ಲಿ ಹೇಳಿದಂತೆ ತನ್ನನ್ನು ಆಶ್ರಯಿಸುವ ವಿಷಯದಲ್ಲಿ ಎಲ್ಲರಿಗೂ ಸಮಾನನಾಗಿರುವವನು ಅವನು. ತನ್ನನ್ನು ಆಶ್ರಯಿಸಿದವರ ವಿರೋಧಿಗಳನ್ನೆಲ್ಲಾ ಅವನೇ ಮುಂತ ನಿಂತು ಹೋಗಲಾಡಿಸುವವನಾಗಿದ್ದಾನೆ. ಶರಣಾಗತ ರಕ್ಷಣೆ ಎಂಬುದನ್ನೇ ಒಬ್ಬನ ಯಜಮಾನನು ಸಂಕಲ್ಪಿಸಿ ಮಾಡುವ 'ಅಹೀನಂ' ಎಂಬ ಯಾಗಕ್ಕೆ ಹೋಲಿಸಿದ್ದಾರೆ ಚತುರ್ವಿಧವಾದ ಪುರುಷಾರ್ಥಗಳನ್ನು ಬಿಟ್ಟುಕೊಟ್ಟು ಭಗವಂತನಿಗಾಗಿಯೇ ತನ್ನ ಜೀವಿತವನ್ನು ಸಮರ್ಪಿಸಿದ ಜಟಾಯುವಿನ ಆದರ್ಶವನ್ನು ಕೊಂಡಾಡಿದ್ದಾರೆ ಶರಣಾಗತ ರಕ್ಷಣೆಯು ಅವನು ಕೈಕೊಂಡ ವ್ರತವೆಂಬುದನ್ನು ಅವನಲ್ಲಿ ನಿವೇದಿಸುತ್ತಾರೆ. ಭಗವಂತನಲ್ಲಿ ಶರಣಾದವರು ಆ ಭಗವಂತನ ಅನುಗ್ರಹಾತಿಶಯದಿಂದ ಸರ್ವವಿಧವಾದ ಕೈಂಕರ್ಯವನ್ನು ಅವನಿಗೆ ಸಲ್ಲಿಸಿ ಅವನನ್ನು ಸಂತೋಷಪಡಿಸುವರು ಎಂದು ನಿರೂಪಿಸುತ್ತಾರೆ. ಈ ಸ್ತೋತ್ರದಲ್ಲಿ ಭಗವಂತನ ಪರತತ್ವವನ್ನೂ, ಕಲ್ಯಾಣಾನುಣಾಕರತ್ವವನ್ನೂ, ಶ್ರಿಯಃಪತಿತ್ವವನ್ನೂ, ಆಶ್ರಿತವಾತ್ಸಲ್ಯವನ್ನೂ, ಶರಣಾಗತ ರಕ್ಷಣತ್ವವನ್ನೂ, ನಿತ್ಯಕೈಂಕರ್ಯ ಪ್ರದತ್ವವನ್ನೂ ಕೊಂಡಾಡಿ ಅವನನ್ನೇ ಆಶ್ರಯಿಸಿ ಪರಮಾರ್ಥ ಪ್ರಾಪ್ತಿಯನ್ನು ಪಡೆಯಬಹುದೆಂದು ನಿರೂಪಿಸಿದ್ದಾರೆ.

# ಶ್ರೀ ಪರಮಾರ್ಥಸ್ತುತಿಃ

ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ॥

ಕವಿತಾರ್ಕಿಸಿಂಹರೂ ವೇದಾಂತಾಚಾರ್ಯವರ್ಯರೂ ಆದ ಶ್ರೀಮದ್ವೆಂಕಟನಾಥರು ನನ್ನ ಹೃದಯದಲ್ಲಿ ಎಲ್ಲ ಕಾಲವೂ ನೆಲಸಿರಲಿ.

ಶ್ರೀಮತ್ ಗೃಧ್ರಸರಸ್ತೀರ - ಪಾರಿಜಾತಂ ಉಪಾಸ್ಮಹೇ।
ಯತ್ರ ತುಂಗೈರತುಂಗೈಶ್ಚ ಪ್ರಣತೈಃ ಗೃಹ್ಯತೇ ಫಲಂ॥ 1 ॥

ಶ್ರೀಮದ್ಯುಕ್ತವಾದ 'ಗೃಧ್ರಸರಸ್' ಅಥವಾ 'ಜಟಾಯುಪುಷ್ಕರಿಣಿ'ಯ ತೀರದಲ್ಲಿರುವ ಪಾರಿಜಾತನನ್ನು ನಾವು ಭಜಿಸುತ್ತೇವೆ. ಉನ್ನತರೂ ಉನ್ನತರಲ್ಲದವರೂ ಅವನಲ್ಲಿ ಶರಣು ಹೋಗಿ ಫಲವನ್ನು ಗ್ರಹಿಸುವವನಾಗಿದ್ದಾರೆ.

(ವಿವರಣೆ)

ಗೃಧ್ರಸರಸ್ಸಿನ ತೀರದಲ್ಲಿ ನಿತ್ಯವಾಸ ಮಾಡುತ್ತಿರುವ ವಿಜಯರಾಘವಸ್ವಾಮಿಯನ್ನು ಇಲ್ಲಿ 'ಪಾರಿಜಾತ' ಎಂದು ಸ್ತುತಿಸಿದ್ದಾರೆ. ಪ್ರಸಿದ್ಧವಾದ ದೇವಲೋಕದ ಪಾರಿಜಾತದಂತೆ ಅಲ್ಲ ಈ ಪಾರಿಜಾತ. ಇವನು 'ದಂಡಕಾತಪೋವನ, ಜಂಗಮಪಾರಿಜಾತ'. 'ಎನಕ್ಕೇ ತನ್ನೈತಂದ ಕರ್ಪಕಮೆ ಎಂದು ಆಳ್ವರ್ ಹಾಡಿರುವಂತೆ ತನಗಿಂತ ಬೇರೆಯಾದ ವಿಷಯಗಳಲ್ಲಿ ವೈರಾಗ್ಯವನ್ನುಂಟು ಮಾಡಿಸಿ ತನ್ನನ್ನೇ ಎಲ್ಲರಿಗೂ ಯಾವ ಭೇದವೂ ಇಲ್ಲದೇ ಕೊಟ್ಟುಕೊಂಡಿರುವ ಪರಮೋದಾರನಾದ ಕಲ್ಪವೃಕ್ಷ ಇವನು. ಈ ವಿಜಯ ರಾಘವಪಾರಿಜಾತನು ಅರ್ಥಿಗಳನ್ನು ಉಂಟು ಮಾಡಿ ಅವರಿಗೆ ಕಾಂಕ್ಷಾಧಿಕವಾಗಿ ಅಭೀಷ್ಟಗಳನ್ನು ಪೂರ್ಣವಾಗಿ ಅನುಗ್ರಹಿಸುವವನಾಗಿದ್ದಾನೆ. ಈ ಪಾರಿಜಾತ ವೃಕ್ಷದ ಫಲವನ್ನು ಉನ್ನತರೂ ಉನ್ನತರಲ್ಲದವರೂ ಬಿಡಿಸಿಕೊಳ್ಳಬಹುದು. ಅದಕ್ಕೆ ಉಪಾಯವೆಂದರೆ ಅವನಲ್ಲಿ ಪುಣೆತರಾಗುವುದೇ. ಅವನ ಚರಣಾರವಿಂದಗಳಲ್ಲಿ ತಲೆಬಾಗಿದವರು ಮಹೋನ್ನತವಾದ ಆ ಪಾರಿಜಾತನ ಫಲಗಳನ್ನು ಕೈಗೆ ಎಟುಕಿಸಿಕೊಳ್ಳುವರು. 'ಪ್ರಣತೈಃ' ಎಂದು ಇಲ್ಲಿ ಹೇಳಿರುವುದು ಮಹಾವಿಶ್ವಾಸಪೂರ್ವಕವಾದ ಪ್ರಪತ್ತಿಯನ್ನು ಸೂಚಿಸುತ್ತದೆ.

ಭಗವಂತನಲ್ಲಿ ಶರಣಾಗತಿ ಮಾಡುವುದಕ್ಕೆ ಎಲ್ಲರಿಗೂ ಅಧಿಕಾರವಿದೆ ಎಂಬುದನ್ನು 'ತುಂಗೈಃ ಅತುಂಗೈಶ್ಚ' ಎಂದು ತಿಳಿಸಿದ್ದಾರೆ. ಶರಣಾಗತಿಯು ಎಂದೂ ನಿಷ್ಫಲವಾಗುವುದಿಲ್ಲವೆಂಬುದನ್ನು 'ಗೃಹ್ಯತೇಫಲಂ' ಎಂಬುದು ತೋರಿಸುತ್ತದೆ. ಇಂ ಪರಮೋದಾರನೂ, ಸರ್ವಸಮನೂ, ಕಾರುಣ್ಯಪೂರ್ಣನೂ, ಸರ್ವಾಭೀಷ್ಟಪ್ರದನೂ ಆದ ಪರಮಾತ್ಮನು ಸರ್ವಸುಲಭನಾಗಿ, ಎಲ್ಲರೂ ತನ್ನನ್ನು ಬಂದ ಸೇವಿಸುವುದಕ್ಕಾಗುವಂತೆ ಗೃಧ್ರ ಸರಸ್ಸಿನ ತೀರದಲ್ಲಿ ನಿತ್ಯವಾಸ ಮಾಡುತ್ತಿದ್ದಾನೆ ಅವನನ್ನು ನೀವೂ ಭಜಿಸಿ ಧನ್ಯರಾಗಿ ಎಂದು ನಿರೂಪಿಸುತ್ತಾರೆ.

ಗುರುಭಿಃ ತ್ವದನನ್ಯಸರ್ವಭಾವೈಃ
ಗುಣಸಿಂಧೌ ಕೃತಸಂಪ್ಲವಸ್ತ್ವದೀಯೇ।
ರಣಪುಂಗವ ವಂದಿಭಾವಮಿಚ್ಛನ್
ಅಹಮಸ್ಮಿ ಏಕಮನುಗ್ರಹಾಸ್ಪದಂ ತೇ॥ 2 ॥

ಎಲ್ಲ ರೀತಿಗಳಿಂದಲೂ ನಿನ್ನೊಬ್ಬನಲ್ಲೇ ನೆಟ್ಟ ಮನಸ್ಸನ್ನುಳ್ಳ ಆಚಾರ್ಯರುಗಳಿಂ ನಿನ್ನದೇ ಆದ ಕಲ್ಯಾಣ ಗುಣ ಸಮುದ್ರದಲ್ಲಿ ಮೀಯಿಸಲ್ಪಟ್ಟವನಾದ ನಾನು ಹೇ ರಣಪುಂಗವ, ನಿನ್ನ ಸ್ತುತಿಪಾಠತನ ಭಾವವನ್ನು ಬಯಸಿದವನಾಗಿ ನಿ ಅನುಗ್ರಹಕ್ಕೆ ಪ್ರಧಾನಪಾತ್ರನಾಗಿದ್ದೇನೆ.

(ವಿವರಣೆ)

ಕರುಣಾಳುಗಳಾದ ಆಚಾರ್ಯರುಗಳು ಪರಮಾತ್ಮನ ಅಸೀಮವಾ ಮಹಿಮೆಯನ್ನು ಅನಂತವಾದ ಕಲ್ಯಾಣ ಗುಣಗಳನ್ನು ತಿಳಿಸಿಕೊಟ್ಟು ಮಹೋ ಕಾರ ಮಾಡಿದ್ದಾರೆ. ಆ ಭಗವಂತನ ಕಲ್ಯಾಣ ಗುಣಗಳನ್ನು ಆಚಾರ್ಯ ಯಾಮುನರು - ''ವಶೀ ವದಾನ್ಯಃ ಗುಣವಾನ್ ಋಜುಃ ಶುಚಿಃ ಮೃದು ದಯಾಲುಃ ಮಧುರಃ ಸ್ಥಿರಃ ಸಮಃ।

ಕೃತೀ ಕೃತಜ್ಞಃ ತ್ವಮಸಿ ಸ್ವಭಾವತಃ ಸಮಸ್ತ ಕಲ್ಯಾ ಗುಣಾಮೃತೋದಧಿಃ॥'' ಎಂದು ಅನುಭವಿಸಿದ್ದಾರೆ.

ಭಗವದ್ರಾಮಾನುಜರು - 'ಸ್ವಾಭಾವಿಕಾನವಧಿಕಾತಿಶಯಜ್ಞಾನಬಲೈಶ್ವರ್ಯ

ವೀರ್ಯಶಕ್ತಿತೇಜಃ ಪ್ರಭೃತ್ಯ ಸಂಖ್ಯೇಯ ಕಲ್ಯಾಣ ಗುಣಗಣ ಮಹೋದಧಿಃ, ಸ್ವಾಭಿಮತಾನುರೂಪೈಕ ರೂಪಾಚಿಂತ್ಯ ದಿವ್ಯಾದ್ಭುತ ನಿತ್ಯನಿರವದ್ಯನಿರತಿಶಕಾಯೆ ಜ್ವಲ್ಯ ಸೌಂದರ್ಯ ಸೌಗಂಧ್ಯ ಸೌಕುಮಾರ್ಯ ಲಾವಣ್ಯ ಯೌವ್ವನಾದ್ಯಂತ ಗುಣನಿಧಿ ದಿವ್ಯರೂಪಃ' - ಎಂದು ಅನುಭವಿಸಿದ್ದಾರೆ. ಇಂಥ ಕಲ್ಯಾಣ ಗುಣಾಮೃತ ಸಾಗರದಲ್ಲಿ ನಿಮಗ್ನರಾಗಿ ಪರಮಾನಂದವನ್ನು ಅನುಭವಿಸಿದ ಆಚಾರ್ಯರು ಅದರಿಂದ ಪ್ರಭಾವಿತರಾಗಿ ಅವನನ್ನು ಸ್ತುತಿಸಲು ಇಚ್ಛೆಸಿದವರಾಗಿ ಆ ಪರಮಾತ್ಮನ ಅನುಗ್ರಹವನ್ನು ಇಲ್ಲಿ ಬೇಡುತ್ತಿದ್ದಾರೆ. 'ತನ್ಮೇ ಸಮರ್ಪಯ ಮತಿಂಚ ಸರಸ್ವತೀಂಚ' ಎಂದು ವರದರಾಜಪಂಚಾಶತ್ ಸ್ತೋತ್ರದಲ್ಲಿ ಬೇಡಿದಂತೆ ಇಲ್ಲಿಯೂ ಆ ಪರಮಾತ್ಮನ ಅನುಗ್ರಹವನ್ನು ಬೇಡುತ್ತಾರೆ. ಸ್ತೋತ್ರ್ಯನೂ, ಸ್ತುತ್ಯನೂ ಆದ ಆ ಪರಮಾತ್ಮನ ಅನಂತ ಕಲ್ಯಾಣ ಗುಣಗಳ ಅನುಸಂಧಾನ ಮಾಡಿದವರು ಅವನನ್ನು ಸ್ತೋತ್ರ ಮಾಡದೆ ಇರಲಾರರಷ್ಟೇ? 'ಗುಣನಿಷ್ಠ ಗುಣಾಭಿಧಾನಂ ಸ್ತೋತ್ರಂ' ಎಂದು ಹೇಳಿದಂತೆ ಅವನಲ್ಲಿ ಸತ್ಯಭೂತವಾಗಿರುವ ಮಂಗಳ ಗುಣಗಳನ್ನು 'ಮದ್ವಾಶ್ರಮಾವಧಿಯಥಾಮತಿಯಥಾಮತಿವಾಪ್ಯಶಕ್ತಃ ಸ್ತೌಮಿ' ಎಂದು ಯಾಮುನರು ಹೇಳಿದಂತೆ ಸ್ತೋತ್ರ ಮಾಡಲು ಉದ್ಯೋಗಿಸಿ ಆ ಪರಮಾತ್ಮನ ಅನುಗ್ರಹವನ್ನು ಕೋರುತ್ತಾರೆ.

ಭುವನಾತ್ರಯ ಭೂಷಣಾಸ್ತ್ರವರ್ಗಂ
ಮನಸಿ ತ್ವನ್ಮಯತಾಂ ಮಮಾತನೋತು।
ವಪುರಾಹವ ಪುಂಗವ ತ್ವದೀಯಂ
ಮಹಿಷೀಣಾಂ ಅನಿಮೇಷ ದರ್ಶನೀಯಂ॥ 2 ॥

ಲೋಕಕ್ಕೆ ಆಶ್ರಯವಾಗಿರುವ ತತ್ವಗಳನ್ನು ಭೂಷಣಗಳ ಸಮೂಹವನ್ನಾಗಿಯೂ ಆಯುಧಗಳ ಸಮೂಹವನ್ನಾಗಿಯೂ ಉಳ್ಳದ್ದೂ, ನಿನ್ನ ದಿವ್ಯ ಮಹಿಷಿಯರು ಎವೆಯಿಕ್ಕದೆ ನೋಡಲು ತಕ್ಕುದಾದುದೂ ಆದ ನಿನ್ನ ದಿವ್ಯ ಮಂಗಳ ವಿಗ್ರಹವು ಎಲೈ ಯುದ್ಧವೀರನೇ, ನನ್ನ ಮನಸ್ಸಿನಲ್ಲಿ ನೀನೇ ತನ್ಮಯನಾದಂತೆ ನೆಲಸಲಿ.

(ವಿವರಣೆ)

ದಿವ್ಯವಾದ ಆಯುಧಗಳಿಂದಲೂ ದಿವ್ಯವಾದ ಭೂಷಣಗಳಿಂದಲೂ ಕೂಡಿ ರುವ ಪರಮಾತ್ಮನ ದಿವ್ಯಮಂಗಳ ವಿಗ್ರಹವು ಅದ್ಭುತವಾದ ಸೌಂದರ್ಯದಿಂದ ವಿರಾಜಮಾನವಾಗಿರುವುದು. ಪರಮಾತ್ಮನ ದಿವ್ಯಾದ್ಭುತ ಸೌಂದರ್ಯವು ಆಭೂಷ ಣಗಳಿಗೆ ಅತಿಶಯವನ್ನುಂಟು ಮಾಡುವುದಾಗಿದೆ. ದಿವ್ಯಾಯುಧಗಳೂ ಸಹ ಅವನಿಗೆ ಭೂಷಣಗಳಂತೆಯೇ ಆಗಿವೆ. ಇವುಗಳೆಲ್ಲಕ್ಕೂ ಆಶ್ರಯನಾದವನು ಆ ಪರಮಾತ್ಮನು. 'ಭೂಷಣಾನಾಂತು ಭೂಷಣಂ' ಎಂದಲ್ಲವೇ ಅವನನ್ನು ಸ್ತುತಿಸಿರು ವುದು. ಅಸ್ತ್ರಭೂಷಣಗಳ ರೂಪದಲ್ಲಿ ಚಿದಚಿತ್ ತತ್ತ್ವಗಳು ಅವನನ್ನು ಆಶ್ರಯಿಸಿವೆ.

'ಆತ್ಮಾನಮಸ್ಯ ಜಗತೋ ನಿರ್ಲೇಪನಗುಣಾಮಲಂ।
ಬಿಭರ್ತಿ ಕೌಸ್ತುಭಮಣಿ ಸ್ವರೂಪಂ ಭಗವಾನ್ ಹರಿಃ॥

ಶ್ರೀಮತ್ಸ ಸಂಸ್ಥಾನಧರಮನಂತೇಚ ಸಮಾಶ್ರಿತಂ।
ಪ್ರಧಾನಂ, ಬುದ್ಧಿರಪ್ಯಾಸ್ತೇ ಗದಾರೂಪೇಣ ಮಾಧವೇ॥

ಭೂತಾದಿಂ ಇಂದ್ರಿಯಾದಿಂಚ ದ್ವಿಧಾಹಂಕಾರಮೀಶ್ವರಃ।
ಬಿಭರ್ತಿ ಶಂಖರೂಪೇಣ ಶಾರ್ಙ್ಗರೂಪೇಣ ಚಸ್ಥಿತಂ॥

ಪಂಚರೂಪಾತು ಯಾಮಾಲಾ ವೈಜಯಂತೀಗದಾಭೃತಃ।
ಸಾಭೂತ ಹೇತು ಸಂಘಾತೋ ಭೂತಮಾಲಾಚವೈದ್ವಿಜ॥

ಚಲಸ್ವರೂಪಮತ್ಯಂತ ಜವೇನಾಂತರಿತಾನಿಲಂ।
ಚಕ್ರಸ್ವರೂಪಂ ಚಮನೋಧತ್ತೇ ವಿಷ್ಣುಕರೇ ಸ್ಥಿತಂ॥

ಯಾನೀಂದ್ರಿಯಾಣ್ಯಶೇಷಾಣಿ ಬುದ್ಧಿಕರ್ಮಾತ್ಮತಾನಿವೈ।
ಶರರೂಪಾಣ್ಯ ಶೇಷಾಣಿ ತಾನಿಧತ್ತೇ ಜನಾರ್ದನಃ॥

ಬಿಭರ್ತಿಯಚ್ಚಾಸಿ ರತ್ನಂ ಅಚ್ಯುತೋತ್ಯಂತ ನಿರ್ಮಲಂ।
ವಿದ್ಯಾಮಯಂತು ಕುಜ್ಞಾನಂ ಅವಿದ್ಯಾಚರ್ಮ ಸಂಸ್ಥಿತಾ॥

ಎಂದು ಭಗವಚ್ಛಾಸ್ತ್ರದಲ್ಲಿ ನಿರೂಪಿಸಲಾಗಿದೆ. ಇದನ್ನೇ ಆಚಾರ್ಯರು ರಹಸ್ಯತ್ರಯಸಾರದಲ್ಲಿ 'ಪುರುಡನ್ ಮಣಿ ವರಮಾಹ' ಎಂದು ಆರಂಭವಾಗುವ ಪದ್ಯದಲ್ಲಿ ವರ್ಣಿಸಿದ್ದಾರೆ. ಜೀವತತ್ವ ಮೊದಲಾದವುಗಳಿಗೆ ಇರುವ ಅಭಿಮಾನಿ ದೇವತೆಗಳು ಕೌಸ್ತುಭಮಣಿ ಮೊದಲಾದ ರೂಪಯುಕ್ತರಾಗಿರುವರೆಂಬುದು ಇದರ ಭಾವ.

ಜೀವನು ಕೌಸ್ತುಭಮಣಿ, ನಾಶರಹಿತವಾದ ಮೂಲ ಪ್ರಕೃತಿಯು ಶ್ರೀವತ್ಸ, ಮಹತ್ತತ್ತ್ವವುಗದೆ. ಸಮ್ಯಗ್‌ಜ್ಞಾನ ಹಾಗೂ ಅಜ್ಞಾನ ಇವು ಖಡ್ಗ ಮತ್ತು ಅದರ ಒರೆ. ಸಾತ್ವಿಕ ಮತ್ತು ತಾಮಸಾಹಂಕಾರಗಳು ಶಂಖ ಮತ್ತು ಶಾರ್ಙ್ಗಗಳು, ಮನಸ್ಸು ಚಕ್ರ, ಹತ್ತು ಇಂದ್ರಿಯಗಳು ಶರಗಳು. ಪಂಚತನ್ಮಾತ್ರೆಗಳೂ ಪಂಚಭೂತಗಳೂ ವನಮಾಲೆ. ಗರುಡನು ವೇದಾತ್ಮಾ. ಹೀಗೆ ಇಪ್ಪತ್ತೈದು ತತ್ತ್ವಗಳನ್ನು ತನ್ನ ಅಸ್ತ್ರಭೂಷಣಾದಿಗಳ ರೂಪದಲ್ಲಿ ಹೊಂದಿರುವವನು ಆ ಪರಮಾತ್ಮನು. ಇಂಥ ದಿವ್ಯಾದ್ಭುತವಾದ ಸೌಂದರ್ಯವನ್ನುಳ್ಳ ಆ ಸರ್ವೇಶ್ವರನ ರೂಪವನ್ನು ದಿವ್ಯಮಹಿಷಿಯರು ತಮ್ಮ ದಿವ್ಯನಯನಗಳಿಂದ ಪಾನ ಮಾಡುವಂತೆ ಎವೆಯಿಕ್ಕದೆ ನೋಡುತ್ತಿರುತ್ತಾರಂತೆ. ಈ ರೂಪ ನನ್ನ ಮನಸ್ಸಿನಲ್ಲಿ ಸದಾ ನೆಲಸಿರಲಿ ಎಂದು ಬೇಡುತ್ತಾರೆ.

ಅಭಿರಕ್ಷಿತುಮಗ್ರತಃ ಸ್ಥಿತಂ ತ್ವಾಂ
ಪ್ರಣವೇ ಪಾರ್ಥರಥೇ ಚ ಭಾವಯಂತಃ ।
ಅಹಿತಪ್ರಲಶಮೈಃ ಅಯತ್ನಲಭ್ಯೈಃ
ಕಥಯಂತ್ಯಾಹವಪುಂಗವಂ ಗುಣಜ್ಞಾಃ ॥ 4

ಲೋಕಗಳನ್ನೆಲ್ಲಾ ರಕ್ಷಿಸಲು ಪ್ರಣವದಲ್ಲಿಯೂ ಅರ್ಜುನನ ರಥದಲ್ಲಿಯೂ ಮುಂಗಡೆಯೇ ಇರುತ್ತಿರುವ ನಿನ್ನನ್ನು ಧ್ಯಾನಿಸುವವರೂ, ನಿನ್ನ ಕಲ್ಯಾಣ ಗುಣಗಳನ್ನರಿತವರೂ ಆದ ಭಕ್ತರು ತಮ್ಮ ಪ್ರಯತ್ನವಿಲ್ಲದೆಯೇ ತಮ್ಮ ವಿರೋಧಿಗಳನ್ನು ಹೋಗಲಾಡಿಸಿಕೊಂಡವರಾಗಿ ನಿನ್ನನ್ನು 'ಆಹವಪುಂಗವ' ಎಂದರೆ ಯುದ್ಧವೀರನೆಂದು ಕೊಂಡಾಡುತ್ತಾರೆ.

Funding: Tattva Heritage Foundation,Kolkata. Digitization: eGangotri.

(ವಿವರಣೆ)

ಪ್ರಣವಾಕ್ಷರದಲ್ಲಿ 'ಅ' ಕಾರ ಮುಂದಿದೆ. ಅನಂತರ 'ಉ'ಕಾರ, ಮತ್ತು ಕೊನೆಯಲ್ಲಿ 'ಮ' ಕಾರ ಇದೆ. ಅರ್ಜುನನ ರಥದಲ್ಲಿ ಪರಮಾತ್ಮನು ಅವನಿಗೆ ಸಾರಥಿಯಾಗಿ ಅರ್ಜುನನಿಗೂ ಮುಂದೆಯೇ ಇರುತ್ತಿದ್ದಾನೆ. ತಾನು ಮಕಾರವಾಚ್ಯ ನಾದ ಜೀವನವನ್ನು ಸರ್ವತಃ ರಕ್ಷಿಸುವುದಕ್ಕಾಗಿ ಮುಂದೆಯೇ ಇರುತ್ತಿದ್ದಾನೆ ಪ್ರಣವದಲ್ಲಿ. ಎದುರಾಳಿಗಳ ಏಟನ್ನು ತಾನೇ ವಹಿಸುವವನಾಗಿ ಶ್ರೀಕೃಷ್ಣ ಸಾರಥಿಯ ರೂಪದಲ್ಲಿ ಅರ್ಜುನನಿಗೂ ಮುಂದೆ ಇರುತ್ತಿದ್ದಾನೆ. ಇದರಿಂದ ಅವನ ಸರ್ವ ರಕ್ಷಕತ್ವವು ಕಂಡು ಬರುತ್ತದೆ. ವಾಲ್ಮೀಕಿಗಳೂ ಸಹ.

'ಅಗ್ರತ; ಪ್ರಯತೌರಾಮಃ' ಎಂದು ತಾನೇ ಹೇಳಿದರು.

'ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವತಶ್ಚ ಮಹಾಬಲೌ।
ಆಕರ್ಣಪೂರ್ಣ ಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ॥

ಎಂದು ಆ ಪರಮಾತ್ಮನಲ್ಲಿ ಪ್ರಾರ್ಥನೆಯನ್ನು ಸಲ್ಲಿಸಲಾಗುತ್ತದೆ. ತಾನು ಸರ್ವರಕ್ಷಕನೆಂಬುದನ್ನು. ಹೀಗೆ ತನ್ನನ್ನು ಮುಂದೆ ತೋರಿಸಿಕೊಂಡು ಆ ಸ್ವಾಮಿ ಅನುಗ್ರಹಿಸುತ್ತಿದ್ದಾರೆ. ಆ ಪರಮನನ್ನು ಆಶ್ರಯಿಸಿದವರ ಶತ್ರು ವರ್ಗವೆಲ್ಲವೂ ಅವರ ಪ್ರಯತ್ನವೇ ಇಲ್ಲದೆ ಭಗವಂತನ ಅನುಗ್ರಹದಿಂದ ನಾಶವಾಗುವುದು. ಆ ಭಗವಂತನನ್ನು ಭಕ್ತರು 'ಆಹವಪುಂಗವ' ಎಂದು ಕೊಂಡಿದ್ದಾರೆ.

ಕಮಲಾ ನಿರಪಾಯ ಧರ್ಮಪತ್ನೀ
ಕರುಣಾದ್ಯಾಃ ಸ್ವಯಂ ಋತ್ವಿಜೋ ಗುಣಾಸ್ತೇ।
ಅಪಸಂ ಶ್ರಯತಾಂ ಅಹೀನಮಾದ್ಯಂ
ಸಹ ಧರ್ಮಸ್ತದನನ್ಯಸೇವನೀಯಃ॥ 5 ॥

ಶ್ರೀ ಮಹಾಲಕ್ಷ್ಮಿಯು ನಿನ್ನನ್ನು ಎಂದೂ ಬಿಟ್ಟಗಲದ ಧರ್ಮಪತ್ನಿಯಾಗಿದ್ದಾಳೆ. ನಿನ್ನ ಕಾರುಣ್ಯವೇ ಮೊದಲಾದ ಗುಣಗಳು ತಾವೇ ಋತ್ವಿಕ್ಕುಗಳಾಗಿದ್ದಾರೆ. ಶರಣಾಗತ ರಕ್ಷಣೆಯು ಪ್ರಧಾನವಾದ 'ಅಹೀನ' ಎಂಬ ಯಾಗವಾಗಿದೆ. ಆ ಯಾಗವೆಂಬುವ ಧರ್ಮವಾದರೋ ನಿನ್ನನ್ನು ಬಿಟ್ಟು ಬೇರೆಯವರಿಂದ ನಡೆಸಲಾಗುವುದಿಲ್ಲ.

(ವಿವರಣೆ)

ಶರಣಾಗತ ರಕ್ಷಣೆಯನ್ನು ಒಂದು ಯಾಗವೆಂದು ಇಲ್ಲಿ ರೂಪಣ ಮಾಡಿದ್ದಾರೆ. ಈ ಯಾಗವನ್ನು ಆ ಪರಮಾತ್ಮನನ್ನು ಬಿಟ್ಟು ಬೇರೆ ಯಾರೂ ಮಾಡುವುದಕ್ಕಾಗುವುದಿಲ್ಲ. ಆದುದರಿಂದ ಅವನೇ ಈ ಯಾಗದೀಕ್ಷಿತ ಅಥವಾ ಯಜಮಾನ. ಪತ್ನಿ ಇಲ್ಲದೆ ಯಜಮಾನ ಯಾಗ ಮಾಡಲಾರ. 'ವಿಷ್ಣೋಃ ಶ್ರೀಃ ಅನಪಾಯಿನೀ' ಎಂದು ಹೇಳಿದಂತೆ ಅವನೊಡನೆ ಅನನ್ಯಯೋಗವನ್ನು ಹೊಂದಿರುವ ಶ್ರೀ ಮಹಾಲಕ್ಷ್ಮಿಯೇ ಧರ್ಮಪತ್ನಿ ಯಾಗವನ್ನು ನಡೆಸಲು ಋತ್ವಿಕ್ಕುಗಳು ಬೇಕಷ್ಟೇ? ಆ ಪರಮಾತ್ಮನ ಕರುಣೆ ಮೊದಲಾದ ಗುಣಗಳೇ ಋತ್ವಿಕ್ಕುಗಳಾಗಿದ್ದಾರೆ. ಆ ಪರಮಾತ್ಮನು ತನ್ನ ಪತ್ನಿಯೊಡನೆಯೂ ತನ್ನ ಗುಣಗಳೊಡನೆಯೂ ಕೂಡಿದವನಾಗಿ 'ಶರಣಾಗತ ರಕ್ಷಣೆ' ಎಂಬ ಯಾಗವನ್ನು ನಿರ್ವಹಿಸುತ್ತಾನೆ. 'ಅಹೀನ' ಎಂಬುದು ಒಬ್ಬ ಯಜಮಾನನ ಸಂಕಲ್ಪದಿಂದ ಅನೇಕ ದಿವಸಗಳು ನಡೆಯುವ ಯಾಗ 'ಏಕಸ್ಯ ಸಂಕಲ್ಪಾದಹೀನಂ'. ಶ್ರೇಷ್ಠವಾದ ಈ ಶರಣಾಗತ ರಕ್ಷಣೆ ಎಂಬ ಯಾಗವನ್ನು ಆ ಪರಮಾತ್ಮನನ್ನುಳಿದು ಮತ್ತೆ ಯಾರೂ ನಡೆಸಲಾರರು.

ಕೃಪಣಾಃ ಸುಧಿಯಃ ಕೃಪಾಸಹಾಯಂ
ಶರಣಂ ತ್ವಾಂ ರಣಪುಂಗವ ಪ್ರಪನ್ನಾಃ।
ಅಪವರ್ಗನಯಾತ್ ಅನನ್ಯಭಾವಾಃ
ಪರಿವಸ್ಯಾರಸಂ ಏಕಮಾದ್ರಿಯಂತೇ ॥ 6 ॥

ಎಲ್ಲೈರಣ ಪುಂಗವನೇ, ಅಕಿಂಚನರೂ, ನಿನ್ನಲ್ಲಿ ಮಹಾವಿಶ್ವಾಸವನ್ನುಳ್ಳವರೂ ಆದ ಭಕ್ತರು ಕೃಪೆಯಿಂದ ಕೂಡಿರುವ ನಿನ್ನಲ್ಲಿ ಶರಣು ಹೋದವರಾಗಿ, ಬೇರೆಯಾವುದರಲ್ಲಿಯೂ ಮನಸ್ಸನ್ನಿಡದವರಾಗಿ, ಮೋಕ್ಷದಲ್ಲಿ ಹೇಗೋ ಅದೇ ರೀತಿಯಲ್ಲಿ, ನಿನಗೆ ಕೈಂಕರ್ಯ ಮಾಡುವ ಆನಂದ ಒಂದನ್ನೇ ಮಾನ್ಯ ಮಾಡುತ್ತಾರೆ.

(ವಿವರಣೆ)

ಶರಣಾಗತಿಗೆ ಐದು ಅಂಗಗಳು ಉದಯುಕ್ತವಾಗಿವೆ. ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾವಿಶ್ವಾಸ, ಕಾರ್ಪಣ್ಯ ಮತ್ತು ಗೋಪ್ತೃತ್ವವರಣ ಎಂಬುವು ಇವು. ಅನುಕೂಲ್ಯ ಸಂಕಲ್ಪ ಮತ್ತು ಪ್ರಾತಿಕೂಲ್ಯವರ್ಜನ ಎಂಬ ಇವುಗಳಿಂದ ಭಗವದಾಜ್ಞಾಲಂಘನದ ಅಪಾಯ ಪರಿಹಾರವಾಗುತ್ತದೆ. ಆ ಪರಮಾತ್ಮನಿಗೆ ಅಭಿಮತವಾದುದರ ಅನುವರ್ತನ ಶಕ್ಯವಾಗುತ್ತದೆ. ಕಾರ್ಪಣ್ಯವೆಂಬುದು ತನ್ನ ಅಸಹಾಯಕ ಸ್ಥಿತಿಯನ್ನು ತೋರಿ ಬೇರೆ ಮಾರ್ಗಗಳಿಂದ ಅವನನ್ನು ದೂರ ಮಾಡಿಸಿ ಭಗವಂತನ ಕಾರುಣ್ಯವನ್ನು ಮೂಡಿಸುತ್ತದೆ. ಮಹಾವಿಶ್ವಾಸವಾದರೂ ಯಾವ ಸಂದೇಹವೂ ಇಲ್ಲದೆ ಪ್ರವತ್ತಿಯನ್ನನುಷ್ಠಿಸುವುದಕ್ಕೆ ಸಾಧಕವಾಗಿ ನಿರ್ಭರತ್ವವನ್ನುಂಟು ಮಾಡುವುದು. ಅಪವರ್ಗವೂ ಒಂದು ಪುರುಷಾರ್ಥವಾದುದರಿಂದ ಪುರುಷನು ಬೇಡಿದಾಗ ಕೊಡಬೇಕಾದುದರಿಂದ ಗೋಪ್ತೃತ್ವವರಣವೂ ಅವಶ್ಯಕ. ಈ ಐದು ಅಂಗಗಳಲ್ಲಿ ಕಾರ್ಪಣ್ಯ ಮತ್ತು ಮಹಾವಿಶ್ವಾಸ ಅತ್ಯಂತ ಪ್ರಧಾನವಾದವು. 'ಕೃಪಣಾಃ', 'ಸುಧಿಯಃ' ಎಂಬ ಶಬ್ದಗಳಿಂದ ಇವುಗಳಿಂದ ಹೇಳಿದೆ. ಇವು ಉಳಿದ ಅಂಗಗಳಿಗೂ ಉಪಲಕ್ಷಣವಾಗಿವೆ. ಅಪವರ್ಗವನ್ನಪೇಕ್ಷಿಸುವವರು ಇತರ ಯಾವ ಪ್ರಯೋಜನಗಳಲ್ಲಿಯೂ ಮನಸ್ಸನ್ನಿಡಲಾರರು. ಹಾಗೆಯೇ ಮೋಕ್ಷವನ್ನು ಬೇಡುವವರು ಭಗವಂತನ ನಿತ್ಯ ಕೈಂಕರ್ಯದ ಮಹದಾನಂದವೊಂದನ್ನೇ ಬೇಡುತ್ತಾರೆ. 'ವಳುವಿಲಾ ಅಡಿಮೈಶೆಯ್ಯವೇಂಡುನಾಮ್', 'ಉನಕ್ಕೇನಾಮ್ ಆಳ್‌ಶೆಯ್‌ವೋಮೆ' 'ತವಪರಿಚರೇಯಂ ಚರಣಯೋಃ', 'ಕಿಂಕರಃ' ಎಂದು ಬೇಡಿರುವಂತೆ ಭಗವಂತನ ನಿತ್ಯ ಕೈಂಕರ್ಯವೊಂದನ್ನೇ ಪ್ರಪನ್ನರು ಬೇಡುವವರಾಗಿದ್ದಾರೆ. ಭಗವಂತನ ದಿವ್ಯಾನುಭವದ ಪರಿವಾಹವೇ ಕೈಂಕರ್ಯ. ಭಗವದ್ರಾಮಾನುಜರು - 'ನಿತ್ಯಕೈಂಕರ್ಯ ಪ್ರಾಪ್ತ್ಯಪೇಕ್ಷಯಾ' ಎಂದು ಶರಣಾಗತಿಗದ್ಯದಲ್ಲಿ ಹೇಳಿರುವುದನ್ನು ಅನುಸಂಧಾನ ಮಾಡಬೇಕು.

ಅವಧೀರ್ಯ ಚತುರ್ವಿಧಂ ಪುಮರ್ಥಂ
ಭವದರ್ಥೇ ವಿನಿಯುಕ್ತ ಜೀವಿತಃ ಸನ್।
ಲಭತೇ ಭವತಃ ಫಲಾನಿ ಜಂತುಃ
ನಿಖಿಲಾನ್ಯತ್ರ, ನಿದರ್ಶನಂ ಜಟಾಯುಃ॥ 7 ॥

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಬಗೆಯಾದ ಪುರುಷಾರ್ಥಗಳನ್ನು ತಿರಸ್ಕರಿಸಿ ನಿನಗಾಗಿಯೇ ಜೀವಿತವನ್ನು ಸಮರ್ಪಿಸಿದ ಜಂತುವು ನಿನ್ನಿಂದ ಎಲ್ಲ ಫಲಗಳನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಜಟಾಯುವೇ ನಿದರ್ಶನವಾಗಿದ್ದಾನೆ.

(ವಿವರಣೆ)

ಜಟಾಯು ಒಂದು ಪಕ್ಷಿ. ಶ್ರೀ ರಾಮನಿಗಾಗಿ ಅದು ತನ್ನನ್ನೇ ಸಮರ್ಪಿಸಿಕೊಂಡಿತು. ಸೀತೆಯನ್ನು ಅಪಹಾರ ಮಾಡಿ ಹೋಗುತ್ತಿದ್ದ ರಾವಣನನ್ನು ಎದುರಿಸಿ ಅವನೊಡನೆ ಕಾದಾಡಿ ಮರಣವನ್ನು ಹೊಂದಿತು. ಅದು ಯಾವ ಪುರುಷಾರ್ಥವನ್ನು ಆಶಿಸಲಿಲ್ಲ. ಅಂಥ ಜಟಾಯುವಿಗೆ ಶ್ರೀ ರಾಮ, 'ಮಯಾತ್ವಂ ಸಮನುಜ್ಞಾತಃ ಗಚ್ಛ ಲೋಕಾನ್ ಅನುತ್ತಮಾನ್' ಎಂದು ಹೇಳಿ ಪರಮಪದ ವ್ಯಾಪ್ತಿಯನ್ನು ಅನುಗ್ರಹಿಸಿದ. ಆ ಜಟಾಯು ಮೋಕ್ಷಪಥಕ್ಕೆ ಹೋಗಲು ಅನೇಕ ಪ್ರತಿಬಂಧಕಗಳಿದ್ದವು. ಅದು ಯಾವ ಯೋಗಾಭ್ಯಾಸವನ್ನು ಮಾಡಿರಲಿಲ್ಲ. ಎರಡನೆಯದಾಗಿ ತಿರ್ಯಗ್ಯೋನಿಯಲ್ಲಿ ಹುಟ್ಟಿದವನು ಅವನೇ. ಮೂರನೆಯದಾಗಿ ಬ್ರಹ್ಮವಂಶದಲ್ಲಿ ಜನಿಸಿದ ರಾವಣನಿಂದ ಹತನಾದವನು ಅವನು. ಆದರೆ ಆ ಜಟಾಯು ತನ್ನ ಪ್ರಾಣವನ್ನು ಶ್ರೀ ರಾಮನಿಗಾಗಿ ಅರ್ಪಿಸಿದುದರಿಂದ ಶ್ರೀರಾಮ ಅವನಿಗೆ ಪರಗತಿಯನ್ನು ಅನುಗ್ರಹಿಸಿದ.

ಶರಣಾಗತರಕ್ಷಣವ್ರತೀ ಮಾಂ
ನ ವಿಹಾತುಂ ರಣಪುಂಗವಾರ್ಹಸಿ ತ್ವಂ।
ವಿದಿತಂ ಭುವನೇ ವಿಭೀಷಣೋ ವಾ
ಯದಿವಾ ರಾವಣ ಇತ್ಯುದೀರಿತಂ ತೇ॥ 8 ॥

ರಣಪುಂಗವನಾದ ಶ್ರೀರಾಮನೇ, ಶರಣಾಗತರಾದವರನ್ನು ರಕ್ಷಿಸುವುದನ್ನೇ ವ್ರತವನ್ನಾಗಿ ಹೊಂದಿದ ನೀನು ನನ್ನನ್ನು ಕೈ ಬಿಡಕೂಡದು. 'ವಿಭೀಷಣನೇ ಆಗಲಿ, ಅಥವಾ ರಾವಣನೇ ಆಗಿರಲಿ, ಅವನಿಗೆ ಅಭಯವಿತ್ತಿದ್ದೇನೆ. ಕರೆದುಕೊಂಡು ಬಾ' ಎಂಬ ನಿನ್ನ ಹೇಳಿಕೆಯು ಲೋಕದವರಿಗೆಲ್ಲ ಚೆನ್ನಾಗಿ ತಿಳಿದುದೇ ಆಗಿದೆ.

Funding: Tattva Heritage Foundation,Kolkata. Digitization: eGangotri.

(ವಿವರಣೆ)

ವಿಭೀಷಣನು ರಾವಣನಿಂದ ನಿರಸ್ತನಾಗಿ ಬಂದು ಶ್ರೀರಾಮನಲ್ಲಿ ಶರಣಾಗತಿಯನ್ನು 'ರಾಘವಂಶರಣಂಗತಃ'ಎಂದು ಮಾಡಿದ. ಶ್ರೀರಾಮ ವಿಭೀಷಣನನ್ನು ಪರಿಗ್ರಹಿಸುವ ವಿಷಯದಲ್ಲಿ ವಾನರವೀರರು ಅಭಿಪ್ರಾಯವನ್ನು ಕೇಳಿ ಕೊನೆಯಲ್ಲಿ ತನ್ನ ಅಭಿಮತವನ್ನು,'ಸಕೃದೇವ ಪ್ರಪನ್ನಾಯತವಾಸ್ಮೀತಿಚಯಾಚತೇ। ಅಭಯಂ ಸರ್ವಭೂತೇಭ್ಯ: ದದಾಮ್ಯೇತದ್ವ್ರತಂಮಮ।। ಎಂದು ತನ್ನ ವ್ರತವನ್ನು ತಿಳಿಸಿದ. ಆವ್ರತ ನಿಯಮೇನ ಪಾಲಿಸತಕ್ಕದ್ದು. ಸುಗ್ರೀವನನ್ನು ಶ್ರೀರಾಮ ಕಳುಹಿಸುತ್ತಾನೆ. ವಿಭೀಷಣನನ್ನು ಕರೆತರಲು. ಆಗ 'ಆನಮ್ಯೈನಂ ಹರಿ ಶ್ರೇಷ್ಠ ದತ್ತಮಸ್ಯಾಭಯಂಮಯಾ। ವಿಭೀಷಣೋವಾಸುಗ್ರೀವ ಯದಿವಾರಾವಣಸ್ವಯಂ।।'' ಎಂದು ಹೇಳಿದ. 'ಅವನು 'ರಾಘವಂಶರಣಂಗತ:' ಎಂದು ಹೇಳಿದಾಗಲೇ ಅವನಿಗೆ ಅಭಯವನ್ನು ಕೊಟ್ಟಾಯಿತು. ಅವನು ಯಾರೇಆಗಿದ್ದರೂಸರಿ ಅವನಿಗೆ ರಕ್ಷಣೆ ಕೊಟ್ಟಾಗಿದೆ. ಸ್ವಯಂ ರಾವಣನೇ ಈ ರೂಪದಲ್ಲಿ ಬಂದಿದ್ದರೂ ಅವನನ್ನು ಕರೆದು ಕೊಂಡೇ ಬಾ. ಬಾರದಿರುವವನು ರಾವಣ, ವಿಭೀಷಣನಲ್ಲ - ಎಂದು ಹೇಳುವುದಕ್ಕೆ ಬರಬೇಡ.' ಎಂದು ತಿಳಿಸಿದ. ಪರಮಾತ್ಮನು ಶತ್ರುಮಿತ್ರ ಎಂಬ ಭೇದವನ್ನು ಎಣಿಸದೆ ಶರಣಾಗತರನ್ನೆಲ್ಲಾ ರಕ್ಷಿಸುವವನಾಗಿದ್ದಾನೆ. ಶರಣ್ಯನ ಈ ವೈಭವವನ್ನು ಇಲ್ಲಿ ಕೊಂಡಾಡಿದೆ.

ಭುಜಗೇಂದ್ರ-ಗರುತ್ಮದಾದಿಲಭ್ಯೈ:
ತ್ವದನುಜ್ಞಾನುಭವ ಪ್ರವಾಹ ಭೇದ್ಯೈ:।
ಸ್ವಪದೇ ರಣಪುಂಗವ ಸ್ವಯಂ ಮಾಂ
ಪರಿಚರ್ಯಾವಿಭವೈ: ಪರಿಷ್ಕ್ರಿಯೇಥಾಃ।।9।।

ರಣಪುಂಗವನಾದ ವಿಜಯ ರಾಘವಸ್ವಾಮಿಯೇ, ನಿನ್ನ ದಿವ್ಯಸ್ಥಾನವಾದ ವೈಕುಂಠದಲ್ಲಿ ಅನಂತ, ಗರುಡ ಮೊದಲಾದವರಿಗೆ ಲಭ್ಯವಾಗುವಂಥವೂ, ನಿನ್ನ ಅನುಜ್ಞೆಗನುಸಾರವಾಗಿರುವ ಅನುಭವ ಪ್ರವಾಹಗಳ ಪ್ರಕಾರಗಳಿಂದವೂ ಆದ ನನ್ನ ಕೈಂಕರ್ಯ ವಿಶೇಷಗಳಿಂದ ನೀನೇ ನಿನ್ನನ್ನು ಪರಿಷ್ಕರಿಸಿಕೊಳ್ಳಬೇಕು.

(ವಿವರಣೆ)

ಪರಮಪದದಲ್ಲಿ ಆ ಸರ್ವೇಶ್ವರನಿಗೆ ನಾವು ಮಾಡುವ ಕೈಂಕರ್ಯಗಳು

ಅವನಿಗೆ ಸಂತೋಷವನ್ನುಂಟುಮಾಡಲೆಂದು ಇಲ್ಲಿ ಬೇಡಿದ್ದಾರೆ. ಅನಂತ ಗರುಡ ವಿಷ್ವಕೇಸಾದಿಗಳು ಆ ಸ್ವಾಮಿಗೆ ನಿತ್ಯಸೇವೆಯನ್ನು ಸಲ್ಲಿಸುವವರಾದ್ದಾರೆ. ಅವರಿಗೆ ಲಭ್ಯವಾಗುವ ಕೈಂಕರ್ಯಗಳ ಪ್ರಾಕಾರಗಳಿಂದಲೂ ಆದ ನನ್ನ ಅಲ್ಪಸೇವೆಯನ್ನೂ ನೀನು ಸ್ವಯಂ ನೆರವೇರಿಸಿ ತೃಪ್ತನಾಗಬೇಕೆಂದು ಕೋರಿದ್ದಾರೆ.

ವಿಮಲಾಶಯ - ವೆಂಕಟೇಶಜನ್ಮಾ
ರಮಣೀಯ ರಣಪುಂಗವಪ್ರಸಾದಾತ್।
ಅನಸೂಯುಭಿರಾದರೇಣ ಭಾವ್ಯಾ
ಪರಮಾರ್ಥಸ್ತುತಿ: ಅನ್ವಹಂಪ್ರಪನ್ನೈ:॥10॥

ರಣಪುಂಗವನಾದ ವಿಜಯ ರಾಘವಸ್ವಾಮಿಯ ಅನುಗ್ರಹದಿಂದ ಪರಿಶುದ್ಧಮನಸ್ಕರಿಂದ ಶ್ರೀವೆಂಕಟೇಶರಿಂದ ಮೂಡಿಬಂದುದೂ, ರಮಣೀಯವಾದುದೂ ಆದ ಈ ಪರಮಾರ್ಥಸ್ತುತಿಯು ಅಸೂಯೆ ಇಲ್ಲದ ಪ್ರಪನ್ನರಿಂದ ದಿನದಿನವೂ ಆದರದಿಂದ ಅನುಸಂಧಾನ ಮಾಡಲ್ಪಡಲಿ.

(ವಿವರಣೆ)

ಈ ಸ್ತುತಿಯು ಆ ಸರ್ವಶಕ್ತನಾದ ಪರಮಾತ್ಮನ ಅನುಗ್ರಹದಿಂದಲೇ ಆಯಿತೆಂದು ಶ್ರೀಮದಾಚಾರ್ಯರು ಇಲ್ಲಿ ಅನುಸಂಧಾನಮಾಡುತ್ತಾರೆ. ಆ ಪರಮಾತ್ಮನ ಅನುಗ್ರಹವೇ ಅವರು ವಿಮಲಾಶಯರಾದದಕ್ಕೂ ಕಾರಣ ಎನ್ನುತ್ತಾರೆ. ಹತ್ತೇಶ್ಲೋಕಗಳನ್ನು ಹೊಂದಿದ್ದರೂ ಈ ಸ್ತುತಿ ಭಗವಂತನ ಸರ್ವಾತಿಶಾಯಿಯಾದ ಮಹಿಮೆಯನ್ನೂ ರಕ್ಷಕತ್ವವನ್ನು ತಿಳಿಸಿಕೊಟ್ಟು ಅವನಲ್ಲಿ ಪ್ರಸನ್ನರಾದವರು ಅವನ ನಿತ್ಯಕೈಂಕರ್ಯದ ಆನಂದವನ್ನೇ ಬಯಸುವರೆಂದು ತಿಳಿಸಿ, ತನ್ನಲ್ಲಿ ಶರಣಾದವರನ್ನು ಆ ಪರಮಕರುಣಾಳು ರಕ್ಷಿಸಿಯೇ ತೀರುವನೆಂಬ ದೃಢವಿಶ್ವಾಸವನ್ನು ಮಾಡಿಸುತ್ತದೆ. ತತ್ತ್ವಹಿತಪುರುಷಾರ್ಥ ಸ್ವರೂಪವನ್ನು ಹೀಗೆ ಖಚಿತವಾಗಿ ನಿರೂಪಿಸಿರುವ ಈ ಸ್ತುತಿ ಪ್ರಸನ್ನರೆಲ್ಲರಿಗೂ ನಿತ್ಯಾನುಸಂಧಾನ ಮಾಡಲು ತಕ್ಕುದಾಗಿದೆ.

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ।
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ॥

## Sponsors for our publications

### Sristuti (5 languages)

(October 1994)

Sri N. Kasturi Rangan
Sri A. Rajagopalan
Sri K. Vidyasagar
SIV Industries, Coimbatore

### Subhashita Nivi (English)

(March 1995)

Thiruvengadathan Thirumandram,
Madras

### Paramarthastuti

(May 1995)

Nallan Chakravarthi Vijayaraghavan,
Ptisburg

## Our well wishers

Sri G. Rangachari
Sri T.T. Rangaswami
Sri C. Ramakrishna
Sri V.C. Srinivasa Rangan
Sri A.V. Srinivasan
Sri N. Krishnan
Sri S. Vasudevan
Sri G. Mohan